ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಕ್ರೈಸ್ತ ಅಭಿವೃದ್ಧಿ ಪರಿಷತ್‌ನಿಂದ ಚಾಪಲ್‌ಗಳಿಗೆ ಬಿಡುಗಡೆಗೊಳಿಸದ ಅನುದಾನ

ಶ್ರೀ ಐವನ್ ಡಿ'ಸೋಜಾ(ನಾಮನಿರ್ದೇಶನ ಹೊಂದಿದವರು):-

853 (915) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕ್ರೈಸ್ತ ಅಭಿವೃದ್ಧಿ ಪರಿಷತ್‌ನಿಂದ ಚಾಪಲ್‌ಗಳ ದುರಸ್ಥಿಗೆ ಹಣವನ್ನು ಬಿಡುಗಡೆ ಮಾಡಲಾಗಿದೆಯೇ ; ಮಾಡಿದ್ದಲ್ಲಿ, ಅದರ ವಿವರ ನೀಡುವುದು ;

(ಆ) ಕ್ರೈಸ್ತ ಅಭಿವೃದ್ಧಿ ಪರಿಷತ್‌ನಿಂದ ಚಾಪಲ್‌ಗಳಿಗೆ ಹಣ ಬಿಡುಗಡೆ ಮಾಡಲು ನಿರ್ಧಾರ ತೆಗೆದುಕೊಂಡು ಹಣ ಬಿಡುಗಡೆ ಮಾಡಿದ್ದರೂ ದಕ್ಷಿಣ ಕನ್ನಡ ಜಿಲ್ಲೆಯ ನೀರು ಮಾರ್ಗದ ಚಾಪಲ್‌ಗೇ ನೀಡಲು ಆಗುವುದಿಲ್ಲ ಎಂಬ ಹಿಂಬರಹ ನೀಡಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು)

(ಇ) 2018-2019ರ ಮತ್ತು 2019-20ನೇ ಸಾಲಿನಲ್ಲಿ ಕ್ರೈಸ್ತ ಅಭಿವೃದ್ಧಿ ಪರಿಷತ್‌ನಿಂದ ಚಾಪಲ್‌ಗಳಿಗೆ ಬಂದ ಅರ್ಜಿಗಳೆಷ್ಟು; ಈ ಹಿಂದೆ ಚಾಪಲ್‌ಗಳಿಗೆ ಹಣ ಬಿಡುಗಡೆ ಮಾಡಲಾಗಿದೆಯೇ; ಮಾಡಿದ್ದಲ್ಲಿ, ವಿವರ ನೀಡುವುದು ?